# ಸಾಲಿಗ್ರಾಮ

- ಸಾಲಿಗ್ರಾಮ ಎನ್ನುವುದು ಒಂದು ಶಿಲೆ.
  - ಇದು ಭೂಮಿಯ ಮೇಲೆ ಕೋಟ್ಯಂತರ ವರ್ಷಗಳಿಂದಲೂ ಇದೆ.
  - ಪದ್ಮ ಪುರಾಣದಲ್ಲಿ ಈಶ್ವರನು ಸಾಲಿಗ್ರಾಮ ವನ್ನು ಕುರಿತು ಹೀಗೆ ಹೇಳಿದ್ದಾರೆ.

ಮಹಾಲಿಂಗ ಕೋಟಿಭಿಃ ದೃಷ್ಟಿಯದ್ ಫಿಲಂ ಪೂಜತಿ. ಸಾಲಿಗ್ರಾಮ ಶಿಲಾಯಂತು ಏಕಸ್ಯ ಇವಂ ತದ್ಭವೇದ್

  - ಅಂದರೆ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದು ಸಾಮಾನ್ಯ ಹಾಗೆಯೇ ವಿಶ್ವದಾದ್ಯಂತ ಶಿವ ದೇವಾಲಯಗಳಿವೆ.
  - ಆದರೆ ಈ ಶಿಲಾರೂಪದ ವಿಷ್ಣುವೇ ಸಾಲಿಗ್ರಾಮ.
  - ಒಂದು ಸಾಲಿಗ್ರಾಮವನ್ನ ಪೂಜಿಸುವುದು ನೂರು ಶಿವಲಿಂಗವನ್ನು ನೋಡಿದಷ್ಟು ಪೂಜಿಸುವುದಕ್ಕೆ ಸಮಾನ ಎಂದು.

- ಕೂರ್ಮ ಸಾಲಿಗ್ರಾಮ, ಕೃಷ್ಣ ಸಾಲಿಗ್ರಾಮ, ಹಯಗ್ರೀವ ಸಾಲಿಗ್ರಾಮ, ವರಹ, ಮತ್ಸ್ಯ, ವಾಮನ, ಕಲ್ಕಿ, ಪದ್ಮನಾಭ, ಪರಶುರಾಮ ಸಾಲಿಗ್ರಾಮಗಳು ಅಲ್ಲದೆ ಇನ್ನೂ ಅನೇಕ ಹೆಸರುಳಿಂದ ಕರೆಯುತ್ತಾರೆ.
  - ಸಾಲಿಗ್ರಾಮಗಳ ಮೇಲೆ ಸುದರ್ಶನ ಚಕ್ರದ ರೀತಿಯಲ್ಲಿ ಚಕ್ರಗಳನ್ನು ಕಾಣಬಹುದು.
  - ಈ ಸಾಲಿಗ್ರಾಮಗಳು ನಮ್ಮ ನಾಲ್ಕಾಣೆಯಸ್ಟು ಅಗಲ ರಿಂದ ಹಿಡಿದು ನಮ್ಮ ಮುಷ್ಟಿ ಯಷ್ಟು ದೊಡ್ಡ ಗಾತ್ರದಲ್ಲಿಯೂ ದೊರೆಯುತ್ತವೆ.
  - ಸಾಮಾನ್ಯವಾಗಿ ಕೆಂಪು, ನೀಲಿ, ಹಳದಿ, ಕಪ್ಪು ಹಾಗೂ ಹಸಿರು ಬಣ್ಣದ ಸಾಲಿಗ್ರಾಮಗಳು ದೊರೆಯುತ್ತವೆ.
  - ಸಾಲಿಗ್ರಾಮಗಳನ್ನ ಸೂಕ್ಷ್ಮವಾಗಿ ಗಮನಿಸಿದರೆ ಬಣ್ಣ ಬದಲಾವಣೆ ಆಗುವುದನ್ನು ಗಮನಿಸಬಹುದು.
  - ಹೊಂಬಣ್ಣದ ಹಾಗೂ ಹಳದಿ ಬಣ್ಣದ ಸಾಲಿಗ್ರಾಮ ಗಳನ್ನು ಪೂಜಿಸುವುದರಿಂದ ಮನಶ್ಯಾಂತಿ, ಅಭ್ಯುದಯ ಹಾಗೂ ಧನಪ್ರಾಪ್ತಿ ಎನ್ನುವ ನಂಬಿಕೆ ಇದ್ದರೂ ಹೆಚ್ಚಾಗಿ ಕಪ್ಪು ಶಿಲೆಯ ಸಾಲಿಗ್ರಾಮಗಳನ್ನೆ ಪೂಜಿಸುವುದು.
  - ಸಾಮಾನ್ಯವಾಗಿ ದುಂಡಗೆ ಇರುವ ಈ ಶಿಲೆ ವಿವಿಧ ಆಕಾರಗಳಲ್ಲಿಯೂ ದೊರೆಯುತ್ತದೆ. ಸಾಲಿಗ್ರಾಮ ಪೂಜೆ ಗೆ ತುಳಸಿ ಅತ್ಯಂತ ಶ್ರೇಷ್ಠ ಎನ್ನುತ್ತಾರೆ.

- ಸ್ಕಂದಪುರಾಣದಲ್ಲಿ ಹಾಗೂ ಪದ್ಮ ಪುರಾಣದಲ್ಲಿ ಹೇಳಿರುವ ಪ್ರಕಾರ ಸಾಲಿಗ್ರಾಮವನ್ನ ಪೂಜಿಸುವುದರಿಂದ ಸುಖ, ಶಾಂತಿ,ಆರೋಗ್ಯ, ಐಶ್ವರ್ಯ ಹಾಗೂ ಉತ್ತಮ ಪತ್ನಿ, ಪುತ್ರರೂ ಲಭಿಸುವರೆಂಬ ಹಾಗೂ ಮೋಕ್ಷ ಪ್ರಾಪ್ತಿಯಾಗುತ್ತದೆ ಎನ್ನುವ ಪ್ರತೀತಿ ಇದೆ.
  - ಸಾಲಿಗ್ರಾಮಕ್ಕೆ ಅಭಿಷೇಕ ಮಾಡಿದ ನೀರು ಹಾಲು ಮೊಸರುಗಳ ಸೇವನೆಯಿಂದ ಚಿಂತೆ ಒತ್ತಡಗಳು ಕಡಿಮೆಯಾಗಿ ಅರೋಗ್ಯವೃದ್ಧಿಯಾಗುವ ದಿವ್ಯಶಕ್ತಿ ಹೊಂದಿದೆ.

- ಈ ಶಿಲೆಯು ಹಿಮಾಲಯದ ತಪ್ಪಲಿನಲ್ಲಿ ಇರುವ ಕಾಲಿಗಂಡಕಿ ನದಿಯ ಸಮೀಪದ ಶಾಲಗ್ರಾಮ ಶಿಲೆ ಎಂದು ಕರೆಯಲ್ಪಡುವ ಬಳಿ ಈ ಸಾಲಿಗ್ರಾಮದ ರೂಪವನ್ನು ಪಡೆಯುತ್ತದೆ.
  - ಗಂಡಕೀ ನದಿಯ ಪಾತ್ರದಲ್ಲಿ ಇರುವ ಮುಕ್ತಿನಾಥ ಹಾಗೂ ದಾಮೋದರ ಕುಂಡದಲ್ಲಿ ಹೆಚ್ಚಾಗಿ ಈ ಸಾಲಿಗ್ರಾಮದ ಶಿಲೆಗಳು ದೊರೆಯುವುದರಿಂದ ಸಾಲಿಗ್ರಾಮ ಕ್ಷೇತ್ರವೆಂದು ಕರೆಯುತ್ತಾರೆ.

- ವಜ್ರದಂತಹ ಹಲ್ಲುಗಳನ್ನು ಹೊಂದಿರುವ ವಜ್ರ ಕೀಟ ಎನ್ನುವ ಹುಳುವು ಈ ಶಿಲೆಗಳಲ್ಲಿ ಒಂದು ಸಣ್ಣ ರಂಧ್ರವನ್ನು ಕೊರೆದು ಒಳ ಸೇರಿ ತನ್ನ ಹಲ್ಲುಗಳಿಂದ ಚಕ್ರಾಕಾರವಾಗಿ ಕೆತ್ತನೆಯನ್ನು ಮೂಡಿಸುತ್ತದೆ.
  - ಈ ಕೀಟ ಕೊರೆಯುವಾಗ ಸ್ರವಿಸುವ ದ್ರವದಿಂದ ಚಿನ್ನ ಉತ್ಪತ್ತಿಯಾಗುತ್ತದೆ ಎಂದೂ, ಹೀಗೆ ವಜ್ರ ಕೀಟಗಳು ಕೊರೆದ ಶಿಲೆಗಳು ಅಸಲಿ ಸಾಲಿಗ್ರಾಮ ಎನ್ನುವ ಪ್ರತೀತಿ ಇದೆ.
  - ಹಾಗೆಯೇ ಗಂಡಕೀ ನದಿಯ ಆಳದಲ್ಲಿ ದೊರೆಯುವ ಸಾಲಿಗ್ರಾಮಗಳು ಶ್ರೇಷ್ಠ ಹಾಗೂ ಅಸಲಿ ಎನ್ನುವ ಪ್ರತೀತಿಯೂ ಇದೆ.

- ಸಾಮಾನ್ಯವಾಗಿ ಕೆಲ ಮನೆಗಳಲ್ಲಿ ಹಾಗೂ ದೇವಾಲಯಗಳಲ್ಲಿ ಸಾಲಿಗ್ರಾಮಗಳನ್ನ ಪೂಜಿಸುತ್ತಾರೆ.
  - ಪಂಚಾಯತನ ಪೂಜೆ ಮಾಡುವಾಗ ವಿಷ್ಣುವಿನ ಬದಲಿಗೆ ಸಾಲಿಗ್ರಾಮ ವನ್ನು ಇಟ್ಟು ಪೂಜೆ ಮಾಡುತ್ತಾರೆ.
  - ಇದಕ್ಕೆ ವಿಶೇಷ ವಿದ್ಯೆ, ಶಾಸ್ತ್ರ ವಿಧಿ, ನಿಶ್ಚಿತ ಪದ್ಧತಿ ಅಂತ ಏನೂ ಇಲ್ಲದಿದ್ದರೂ ನೇಮ ನಿಷ್ಠೆ ಯಿಂದ ಪೂಜಿಸಿದರೆ ಒಳ್ಳೆಯದು.
  - ಒಂದೇ ಸಾಲಿಗ್ರಾಮವನ್ನೂ ಪೂಜಿಸುವುದು ಒಳ್ಳೆಯದು, ಹಾಗೆಯೇ ಒಂದೇ ದಿನ 12 ಸಾಲಿಗ್ರಾಮಗಳನ್ನ ಪೂಜಿಸಿದರೆ ವ್ಯಕ್ತಿಯ ಶ್ರೇಷ್ಟತೆಯ ಹೆಚ್ಚಿ ಅಪರಾಧಗಳಿಂದ ಮುಕ್ತಿ ಹೊಂದುತ್ತಾನೆ ಎನ್ನುವ ನಂಬಿಕೆ ಇದೆ.

- ಸಾಲಿಗ್ರಾಮವನ್ನ ಪೂಜಿಸಲು ಆರಂಭಿಸಿದರೆ ದಿನವೂ ಅಭಿಷೇಕ ಪೂಜೆ ಹಾಗೂ ನೈವೇದ್ಯ ನಡೆಯಲೇಬೇಕು ಎಂದು ಹೇಳುವುದನ್ನು ಕೇಳಿದ್ದೇವೆ.
  - ಹೀಗೆ ದಿನ ನಿತ್ಯ ಪೂಜೆ ಸಲ್ಲಿಸ ಲು ಆಗದಿದ್ದರೆ ಅಂತಹ ಸಮಯದಲ್ಲಿ ಅಕ್ಕಿಯಲ್ಲಿ ಸಾಲಿಗ್ರಾಮವನ್ನು ಇಡಬೇಕು, ಮತ್ತು ಆ ಅಕ್ಕಿ ಕೆಡುವ ಮುಂಚೆ ಬದಲಾಯಿಸಬೇಕು.
  - ಪೂಜೆ ಸಾಧ್ಯವೇ ಇಲ್ಲ ಅನ್ನಿಸಿದಾಗ ದಿನ ನಿತ್ಯ ಪೂಜೆ ನಡೆಯುವ ಮಠ, ದೇವಾಲಯಕ್ಕೆ ಕೊಡಬಹುದು.
  - ದೇವಾಲಯಗಳಲ್ಲಿ ಕೂಡಾ ಹೆಚ್ಚು ಸಾಲಿಗ್ರಾಮಗಳು ಸಂಗ್ರಹವಾದರೆ ಪ್ರಧಾನ ಶಕ್ತಿಯ ಆರಾಧನೆಯನ್ನು ಮಾಡಿ ನದಿಯಲ್ಲಿ ವಿಸರ್ಜಿಸಬಹುದು ಎನ್ನುವರು.

- ದೇವಿ ಪುರಾಣದ ಪ್ರಕಾರ ಜಲಂಧರನನ್ನು ಕೊಲ್ಲಲು ವಿಷ್ಣುವು ಜಲಂಧರನ ಪತ್ನಿ ಬೃಂದಾಳ ಪಾತಿವ್ರತ್ಯ ಭಂಗ ಮಾಡಬೇಕಾಗುತ್ತದೆ.
  - ಇದರಿಂದ ಕೋಪ ಗೊಂಡ ಬೃಂದಾ ವಿಷ್ಣುವಿಗೆ ಹುಲ್ಲು (ದರ್ಭೆ) ಮರ (ಅಶ್ವತ್ಥ ವೃಕ್ಷ) ಕಲ್ಲು (ಸಾಲಿಗ್ರಾಮ) ವಾಗು ಎಂದು ಕೊಟ್ಟ ಶಾಪದಿಂದ ಸಾಲಿಗ್ರಾಮ ರೂಪ ತಾಳಿದ ಎನ್ನುವ ಕಥೆಯಿದೆ.
  - ಹಾಗೆಯೇ ಗಂಡಕೀ ಎನ್ನುವ ಭಕ್ತೆಯ ವಿಷ್ಣುವನ್ನು ಕುರಿತು ತಪಸ್ಸು ಮಾಡಿ ವರವನ್ನು ಪಡೆದ ಸಲುವಾಗಿ ಅವಳು ನದಿಯಾಗಿ ಹರಿಯುವಾಗ ವಿಷ್ಣು ಆ ನದಿಯಲ್ಲಿ ಶಿಲೆಯ ರೂಪದಲ್ಲಿ ದೊರೆಯುತ್ತದೆ ಎನ್ನುವ ಕಥೆಯೂ ಇದೆ.
  - ಈ ಸಾಲಿಗ್ರಾಮಗಳನ್ನು ನಕಲು ಮಾಡಿ ಮಾರುವವರು ಇದ್ದಾರೆ, ಕೊಳ್ಳುವ ಮುಂಚೆ ಸರಿಯಾದ ತಿಳುವಳಿಕೆ ಇರುವವರನ್ನು ಸಂಪರ್ಕಿಸುವುದು ಒಳ್ಳೆಯದು.
  - ಅಸಲಿ ಸಾಲಿಗ್ರಾಮ ಪೂಜಿಸಿದರೆ ಉತ್ತಮ ಫಲಿತಾಂಶ ದೊರೆಯುತ್ತದೆ. (ಪಂಚಾಯತನ ದೇವರು ಎಂದರೆ ಸೂರ್ಯ, ಗಣೇಶ, ದುರ್ಗಿ, ಶಿವ ಹಾಗೂ ವಿಷ್ಣು)

## ಸಾಲಿಗ್ರಾಮ ಪೂಜೆ ಮಾಡುವುದರಿಂದ ಆಗುವ ಲಾಭಗಳು

- ಗಾಢವಾದ ಕಪ್ಪು ಬಣ್ಣ ಹಾಗೂ ನುಣುಪಾದ ಕಲ್ಲಿನ ರೂಪದಲ್ಲಿ ಇರುವುದೇ ಸಾಲಿಗ್ರಾಮ.
  - ಈ ಕಲ್ಲನ್ನು ವಿಷ್ಣುವಿನ ರೂಪ ಎಂದು ಪರಿಗಣಿಸಲಾಗುವುದು.

- ದೈವ ಶಕ್ತಿಯನ್ನು ಹೊಂದಿರುವ ಸಾಲಿಗ್ರಾಮವನ್ನು ಮನೆಯಲ್ಲಿ ಇಟ್ಟು ಪೂಜಿಸಿದರೆ ಸಕಾರಾತ್ಮಕ ಶಕ್ತಿಯು ಮನೆಯೊಳಗೆ ಆಗಮಿಸುವುದು.
- ಇದನ್ನು ಮನೆಯಲ್ಲಿ ಪ್ರತಿಷ್ಠೆ ಮಾಡುವಾಗ ಅಥವಾ ಮನೆಯಲ್ಲಿ ಇಟ್ಟುಕೊಳ್ಳುವಾಗ ಸೂಕ್ತ ಕ್ರಮದಡಿಯಲ್ಲಿ ಆರಾಧನೆ ನಡೆಯಬೇಕು.
- ಇಲ್ಲವಾದರೆ ಅದರಿಂದಾಗುವ ದುಷ್ಪರಿಣಾಮಗಳನ್ನು ಎದುರಿಸಬೇಕಾಗುವುದು.

- ವೈಷ್ಣವರು ಹಾಗೂ ವಿಷ್ಣು ಭಕ್ತರು ಸಾಲಿಗ್ರಾಮವನ್ನು ಮನೆಯಲ್ಲಿಟ್ಟು ಪೂಜಿಸುತ್ತಾರೆ.
  - ಇದನ್ನು ಮನೆಯಲ್ಲಿ ಇಟ್ಟು ಪೂಜಿಸಿದರೆ ಭಗವಾನ್ ವಿಷ್ಣುವಿಗೆ ಗೌರವ ನೀಡಿದಂತೆ ಎಂದು ಹೇಳಲಾಗುವುದು.
  - ಸಾಲಿಗ್ರಾಮಕ್ಕೆ ತುಳಸಿ ಎಲೆಯನ್ನು ಅರ್ಪಿಸಿದರೆ ವಿಷ್ಣು ದೇವನು ಸಂತೃಪ್ತನಾಗುವನು.
  - ಯಾರು ಸಾಲಿಗ್ರಾಮಕ್ಕೆ ತುಳಸಿ ಎಲೆಯನ್ನು ಇಟ್ಟು ಪೂಜಿಸುತ್ತಾರೋ ಅವರು ಮನೆಯಲ್ಲಿ ನೆಮ್ಮದಿ, ಸಂತೋಷವನ್ನು ಪಡೆದುಕೊಳ್ಳುವರು.
  - ಅವರಿಗೆ ಎಂದಿಗೂ ಬಡತನ, ಹಣದ ಸಮಸ್ಯೆ, ಅಸಮಾಧಾನ, ಭಯ, ಭ್ರಮೆ ಯಾವುದೂ ಉಂಟಾಗದು.
  - ಜೊತೆಗೆ ಮನೆಯೊಳಗೆ ಯಾವುದೇ ಋಣಾತ್ಮಕ ಶಕ್ತಿ ಮತ್ತು ರೋಗವನ್ನು ತರುವ ಕೀಟಗಳು ಪ್ರವೇಶಿಸುವುದಿಲ್ಲ ಎಂದು ಹೇಳಲಾಗುವುದು.

- ಸಾಲಿಗ್ರಾಮ ಎನ್ನುವುದು ನೇಪಳದ ಗಂಡಕಿ ನದಿಯ ಭಾಗದಲ್ಲಿ ಕಂಡುಬರುತ್ತದೆ.
  - ಸಾಲಿಗ್ರಾಮ ಎನ್ನುವುದು ದೈವ ಶಕ್ತಿಯನ್ನು ಹೊಂದಿರುವ ಒಂದು ಕಲ್ಲಿನ ರೂಪ.
  - ಹಿಂದೂ ಧರ್ಮದಲ್ಲಿ ಪ್ರಕೃತಿಯ ಪ್ರತಿಯೊಂದು ಸಂಗತಿಯಲ್ಲೂ ದೇವರ ರೂಪವನ್ನು ಕಾಣಲಾಗುವುದು.
  - ಅಂತೆಯೇ ಅದಕ್ಕೆ ವಿಶೇಷ, ಪೂಜೆ - ಪುನಸ್ಕಾರವನ್ನು ಸಲ್ಲಿಸಲಾಗುವುದು. ದೈವ ಶಕ್ತಿಯೊಂದಿಗೆ ಸಂಯೋಜನೆಯನ್ನು ಪಡೆದುಕೊಂಡ ಸಾಲಿಗ್ರಾಮವನ್ನು ಮನೆಯಲ್ಲಿ ಇಟ್ಟು ಪೂಜಿಸುವುದು ಒಂದು ಶ್ರೇಷ್ಠ ಪದ್ಧತಿ.
  - ಈ ಪದ್ಧತಿಯ ಹಿಂದೆ ಇರುವ ಹಿನ್ನೆಲೆ, ಉಪಯೋಗ ಹಾಗೂ ಭವಿಷ್ಯಕ್ಕೆ ತರುವ ಅದೃಷ್ಟ ಹೀಗೆ ವಿವಿಧ ಸಂಗತಿಗಳನ್ನು ಲೇಖನದ ಮುಂದಿನ ಭಾಗದಲ್ಲಿ ವಿವರಿಸಲಾಗದೆ.

## ವೈಷ್ಣವರ ಸಂಪ್ರದಾಯದಲ್ಲಿ ಸಾಲಿಗ್ರಾಮ

- ಭಗವಾನ್ ವಿಷ್ಣುವಿನ ಅವತಾರಗಳು ಪುರಾಣ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ.
  - ಅಂತಹ ಅವತಾರಗಳಲ್ಲಿ ರಾಮ ಮತ್ತು ಕೃಷ್ಣನ ಅವತಾರವೂ ಒಂದು ರಾಮನಿಗೆ ಮೀಸಲಾದ ರಾಮನವಮಿ ಹಾಗೂ ಕೃಷ್ಣನಿಗೆ ಮೀಸಲಾದ ಕೃಷ್ಣ ಜನ್ಮಾಷ್ಠಮಿಯಂದು ಸಾಲಿಗ್ರಾಮವನ್ನು ಪೂಜಿಸಲಾಗುವುದು.
  - ಅದು ವಿಷ್ಣುವಿನ ಪುಟ್ಟ ರೂಪ ಎಂದು ಪರಿಗಣಿಸಲಾಗುವುದು.
  - ಅಂದು ಸಾಲಿಗ್ರಾಮದ ಪೂಜೆ, ಶ್ಲೋಕ, ಹವನ, ಯಜ್ಞ ಮತ್ತು ಮಂತ್ರಗಳನ್ನು ಹೇಳುವುದರ ಮೂಲಕ ಪೂಜೆಯನ್ನು ಸಲ್ಲಿಸಿದರೆ ಅತ್ಯಂತ ಪವಿತ್ರ ಎನ್ನಲಾಗುತ್ತದೆ.

- ಅಂದು ಸಾಮಾನ್ಯವಾಗಿ ಸಾಲಿಗ್ರಾಮಕ್ಕೆ ಗಂಗಾ ಅಥವಾ ಪವಿತ್ರ ನೀರಿನ ಅಭಿಷೇಕ ಮಾಡುವರು.
  - ಜೊತೆಗೆ ಐದು ಶುಭ ಪದಾರ್ಥಗಳಾದ ತುಪ್ಪ, ಸಕ್ಕರೆ, ಜೇನುತುಪ್ಪ, ಮೊಸರು ಮತ್ತು ಹಾಲನ್ನು ಸೇರಿಸಿ ಪಂಚಾಮೃತವನ್ನು ತಯಾರಿಸುವರು.
  - ಅದನ್ನು ಸಾಲಿಗ್ರಾಮಕ್ಕೆ ಅಭಿಷೇಕ ಮಾಡುವುದರ ಮೂಲಕ ಪೂಜೆಯನ್ನು ಮಾಡುತ್ತಾರೆ.

- ಸಾವಿರ ಶಿವಲಿಂಗದ ದರ್ಶನ ಪಡೆಯುವುದು ಹಾಗೂ ಒಂದು ಸಾಲಿಗ್ರಾಮದ ದರ್ಶನ ಪಡೆಯುವುದು ಒಂದೇ ಎಂದು ಶಿವನು ಹೇಳಿದ್ದಾನೆ ಎಂದು ಪದ್ಮಪುರಾಣದಲ್ಲಿ ಉಲ್ಲೇಖಿಸಲಾಗಿದೆ.

## ಸಾಲಿಗ್ರಾಮದ ಉಗಮ

- ಒಮ್ಮೆ ಶಿವ ಮತ್ತು ರಾಕ್ಷಸ ಜಲಂಧರ ನಡುವೆ ಯುದ್ಧ ಪ್ರಾರಂಭವಾಯಿತು.
  - ಆಗ ಶಿವನು ವಿಷ್ಣುವಿನ ಹತ್ತಿರ ಸಹಾಯ ಕೇಳಿದನು.
  - ವಿಷ್ಣು ವೃಂದಾಳ ಪತಿ ಜಲಂಧರನ ರೂಪವನ್ನು ತಾಳಿ ವೃಂದಾಳ ಪವಿತ್ರತೆಯನ್ನು ಕೆಡವಿದನು.
  - ನಂತರ ಶಿವನು ಜಲಂಧರನನ್ನು ಸೋಲಿಸಿದನು.
  - ಆಗ ವೃಂದಾ ಕೃಷ್ಣನಿಗೆ ಕಲ್ಲು ಹುಲ್ಲುಮರವಾಗಿ ಹೋಗು ಎಂದು ಶಾಪ ನೀಡಿದಳು.
  - ಅವಳ ಶಾಪದಿಂದ ವಿಷ್ಣು ದೇವನು ಸಾಲಿಗ್ರಾಮದ ಕಲ್ಲು, ದರ್ಬೆ ಮತ್ತು ಅಶ್ವತ್ಥ ಮರವಾಗಿ ಹುಟ್ಟಿದನು ಎಂದು ಹೇಳಲಾಗುತ್ತದೆ.
  - ದರ್ಬೆ ಹುಲ್ಲು ಮತ್ತು ಸಾಲಿಗ್ರಾಮ ಮತ್ತು ಅಶ್ವತ್ಥ ಮರದ ಪೂಜೆಯನ್ನು ಮಾಡಲಾಯಿತು.
  - ಪ್ರತಿ ಶನಿವಾರ ಅಶ್ವತ್ಥ ಮರಕ್ಕೆ ನೀರನ್ನು ಹಾಕುವುದು ಹಾಗೂ ಪೂಜೆ ಮಾಡುವುದು ಮಾಡಿದರೆ ಅತ್ಯಂತ ಪುಣ್ಯ ಪ್ರಾಪ್ತಿಯಾಗುವುದು.
  - ವೃಂದಾಳ ಶಾಪದಿಂದ ವಿಷ್ಣು ಕಲ್ಲಿನ ರೂಪವಾಗಿ ಸಾಲಿಗ್ರಾಮವಾದನು.
  - ಅಂದಿನಿಂದ ಸಾಲಿಗ್ರಾಮದ ಕಲ್ಲನ್ನು ವಿಷ್ಣುವಿನ ರೂಪ ಎಂದು ಪರಿಗಣಿಸಲಾಯಿತು.

## ಸಾಲಿಗ್ರಾಮದಲ್ಲಿ ಚಕ್ರದ ಗುರುತು

- ಭಗವಾನ್ ವಿಷ್ಣುವಿನ ಕೈಯಲ್ಲಿ ಸುದರ್ಶನ ಚಕ್ರ ಇರುವುದು ಸಾಮಾನ್ಯ.
  - ಸಾಲಿಗ್ರಾಮವು ಶ್ರೀ ವಿಷ್ಣುವನ್ನು ಪ್ರತಿನಿಧಿಸುತ್ತದೆ.
  - ಸಾಲಿಗ್ರಾಮದ ಮೇಲೆ ಚಕ್ರಗಳ ಗುರುತು ಇರುವುದನ್ನು ಕಾಣಬಹುದು.
  - ಆ ಚಕ್ರಗಳು ವಿಭಿನ್ನ ಸಂಖ್ಯೆಗಳಿಂದಲೂ ಕೂಡಿರುವುದನ್ನು ಕಾಣಬಹುದು.
  - ವಿಷ್ಣುವಿನ ರೂಪವನ್ನು ಪ್ರತಿಬಿಂಬಿಸುವ ಈ ಕಲ್ಲಿಗೆ ಪೂಜೆಯನ್ನು ಸಲ್ಲಿಸಿದರೆ ಪುಣ್ಯ ಪ್ರಾಪ್ತಿಯಾಗುವುದು.
  - ವಿಷ್ಣು ಪುರಾಣದಲ್ಲಿ ಉಲ್ಲೇಖಿಸಿರುವ ಪ್ರಕಾರ ಸಾಲಿಗ್ರಾಮವು ಶಂಖ, ಗಧಾ, ರಂಧ್ರ, ದೊಡ್ಡ ಮತ್ತು ಸಣ್ಣ ಗಾತ್ರ, ಸುರುಳಿ ಗಾತ್ರ, ಅಂಡಾಕಾರಗಳ ಆಕೃತಿಯಲ್ಲಿ ಹಾಗೂ ಕೆಂಪು, ಹಳದಿ, ಬಹುತೇಕವಾಗಿ ಕಪ್ಪು ಬಣ್ಣಗಳಲ್ಲಿ ಕಂಡು ಬರುತ್ತದೆ ಎಂದು ಹೇಳಲಾಗಿದೆ.

## ಸಾಲಿಗ್ರಾಮದ ಸ್ಥಾಪನೆ

- ಸಾಲಿಗ್ರಾಮದ ಕಲ್ಲು ವಿಷ್ಣುದೇವರ ಪ್ರತಿರೂಪ.
  - ಇದನ್ನು ಮನೆಯಲ್ಲಿ ಇಟ್ಟು ಪೂಜಿಸಬಹುದು.
  - ಸಾಲಿಗ್ರಾಮವನ್ನು ಲಕ್ಷ್ಮಿ, ಸರಸ್ವತಿ, ಗಣೇಶ ಸೇರಿದಂತೆ ಇತರ ದೇವತೆಗಳನ್ನು ಹೊಂದಿದ್ದರೂ ಸಹ ಇಟ್ಟು ಪೂಜಿಸಬಹುದು.
  - ಇದನ್ನು ಮನೆಯಲ್ಲಿ ಇಟ್ಟ ಬಳಿಕ ನಿತ್ಯವೂ ಪೂಜಿಸುವುದನ್ನು ಮರೆಯಬಾರದು.
    - ಪಾಪವನ್ನು ತೊಳೆಯುವುದು
      - ಸಾಲಿಗ್ರಾಮವನ್ನು ಪವಿತ್ರ ಸ್ಥಾನದಲ್ಲಿ ಇಟ್ಟು, ಶ್ರದ್ಧಾ ಭಕ್ತಿಯಿಂದ ಆರಾಧನೆ ಮಾಡಬೇಕು.

        - ಹಾಗೆ ಮಾಡಿದಾಗ ನಮ್ಮ ಹಿಂದಿನ ಜನ್ಮದಲ್ಲಿ ಹಾಗೂ ಈ ಜನ್ಮದಲ್ಲಿ ಮಾಡಿದ ಪಾಪ ಕರ್ಮಗಳೆಲ್ಲವೂ ತೊಳೆದುಹೋಗುತ್ತವೆ.
        - ಮನೆಯಲ್ಲಿ ಒಂದು ಸಾಲಿಗ್ರಾಮವನ್ನು ಇಟ್ಟು ಪೂಜಿಸಿದರೆ **1000** ಹಸುಗಳನ್ನು ಬ್ರಾಹ್ಮಣನಿಗೆ ದಾನ ಮಾಡಿದ ಪುಣ್ಯ ಬರುವುದು.
    - ಉತ್ತಮ ಆರೋಗ್ಯ ಲಭಿಸುವುದು
        - ಮನೆಯಲ್ಲಿ ಸಾಲಿಗ್ರಾಮವನ್ನು ಇಟ್ಟು ಪೂಜಿಸುವಾಗ ಧಾರ್ಮಿಕ ರೀತಿ-ನೀತಿಗಳು ಸೂಕ್ತ ಕ್ರಮದಲ್ಲಿ ನಡೆಯಬೇಕು.
        - ಆಗ ಭಗವಾನ್ ವಿಷ್ಣುವು ವರ ಮತ್ತು ಆಶೀರ್ವಾದವನ್ನು ಕರುಣಿಸುವನು.
        - ವ್ಯಕ್ತಿಯು ಉತ್ತಮ ಆರೋಗ್ಯ ಹಾಗೂ ಉತ್ತಮ ಆಧ್ಯಾತ್ಮಿಕ ಚಿಂತನೆಗಳನ್ನು ಮನಗೊಳ್ಳುವನು.
        - ಇದನ್ನು ಪೂಜಿಸುವಾಗ ವಿಷ್ಣು ದೇವರ ಸಹಸ್ರನಾಮ, ಅಷ್ಟೋತ್ತರ, ವಿಶೇಷ ಮಂತ್ರ, ಶ್ಲೋಕ ಅಥವಾ ಹಾಡನ್ನು ಹೇಳಬೇಕು.
        - ಶುದ್ಧವಾದ ಎಣ್ಣೆಯಲ್ಲಿ ದೀಪವನ್ನು ಬೆಳಗುವುದರ ಮೂಲ ಶ್ರದ್ಧಾ ಭಕ್ತಿಯಿಂದ ಪೂಜೆಯನ್ನು ಸಲ್ಲಿಸಬೇಕು.

## ಸಾಲಿಗ್ರಾಮಕ್ಕೆ ತುಳಸಿ ಎಲೆ

- ಸಾಲಿಗ್ರಾಮದ ಕಲ್ಲಿಗೆ ತುಳಸಿ ಎಲೆಯನ್ನು ಅರ್ಪಿಸಿ ಪೂಜೆಯನ್ನು ಗೈಯಬೇಕು.
    - ಅದು ಅತ್ಯಂತ ಶ್ರೇಷ್ಠವಾದ ಸಂಗತಿ.
    - ಈ ರೀತಿಯ ಪೂಜೆಯಿಂದ ವಿಷ್ಣು ದೇವನು ಸಂತುಷ್ಟನಾಗುವನು.
    - ಹಾಗಾಗಿಯೇ ಪ್ರತಿ ವರ್ಷ ಮಾಡುವ ತುಳಸಿ ಪೂಜೆಯನ್ನು ಸಾಲಿಗ್ರಾಮದ ಕಲ್ಲನ್ನು ಇಟ್ಟು ವಿವಾಹ ಮಾಡುವ ಪದ್ಧತಿ ಇದೆ.
    - ತುಳಸಿಯೊಂದಿಗೆ ಸಾಲಿಗ್ರಾಮದ ಪೂಜೆ ಮಾಡಿದರೆ ಆ ಮನೆಯಲ್ಲಿ ಸುಖ-ಶಾಂತಿ ಹಾಗೂ ನೆಮ್ಮದಿಯು ಸದಾ ಕಾಲ ನೆಲೆಗೊಳ್ಳುವುದು.
    - ಸಾಲಿಗ್ರಾಮ ಪೂಜೆಯಿಂದ ಯಮನು ದೂರ ನಿಲ್ಲುವನು
        - ಸಾಲಿಗ್ರಾಮದ ಪೂಜೆಯನ್ನು ಮಾಡುವವರ ಹತ್ತಿರ ಯಮದೂತನು ಬರುವುದಿಲ್ಲ.
        - ಯಮ ಮತ್ತು ಅವನ ಸೇವಕರು ಬಂದರೆ ನರಕ ಪ್ರಾಪ್ತಿಯಾಗುವುದು.
        - ಅದೇ ಸಾಲಿಗ್ರಾಮವನ್ನು ಪೂಜೆ ಮಾಡುವವರು ಮೋಕ್ಷದ ನಂತರ ವೈಕುಂಠ ಧಾಮ ಅಂದರೆ ವಿಷ್ಣುವಿನ ಪವಿತ್ರ ಸ್ಥಳಕ್ಕೆ ಹೋಗುವರು.
        - ಹಾಗಾಗಿ ಸಾಲಿಗ್ರಾಮವನ್ನು ಮುಕ್ತಿನಾಥ್ ಸಾಲಿಗ್ರಾಮ ಎಂದು ಸಹ ಕರೆಯುವರು.
        - ವಿಷ್ಣು ದೇವನು ಪ್ರತಿಯೊಂದು ಜೀವಿಗೂ ಸ್ವಾತಂತ್ರ್ಯ ಹಾಗೂ ಮುಕ್ತಿಯನ್ನು ನೀಡುವನು ಎಂದು ಹೇಳಲಾಗುವುದು.

## ಸಾಲಿಗ್ರಾಮಕ್ಕೆ ನಿತ್ಯ ಪೂಜೆ

- ಸಾಲಿಗ್ರಾಮವನ್ನು ದೇವರ ಮನೆಯಲ್ಲಿ ಇಟ್ಟು ಪೂಜಿಸುವಾಗ ಸರಿಯಾದ ಧಾರ್ಮಿಕ ಕ್ರಮವನ್ನು ಅನುಸರಿಸಬೇಕು.
    - ಸಾಲಿಗ್ರಾಮದ ಪೂಜೆ ಮಾಡುವಾಗ ಮುಖ್ಯವಾಗಿ ಪಂಚಾಮೃತದ ಅಭಿಷೇಕ ಮಾಡಬೇಕು.
    - ಅದರೊಂದಿಗೆ ಶುದ್ಧ ನೀರು ಹಾಗೂ ತುಳಸಿಯ ನೀರಿನಿಂದಲೂ ಅಭಿಷೇಕ ಮಾಡಬೇಕು ಎಂದು ಹೇಳಲಾಗುವುದು.
    - ಈ ಕ್ರಮವನ್ನು ಅನುಸರಿಸಿದರೆ ಭಗವಾನ್ ವಿಷ್ಣು ಅತ್ಯಂತ ತೃಪ್ತಿಯನ್ನು ಹೊಂದುವನು. ಜೊತೆಗೆ ಅದೃಷ್ಟವನ್ನು ಆಶೀರ್ವದಿಸುವನು.

## ವಿವಿಧ ಹೆಸರಿನ ಸಾಲಿಗ್ರಾಮ

- ಸಾಲಿಗ್ರಾಮಕ್ಕೆ ವಿವಿಧ ಹೆಸರುಗಳಿಂದ ಕರೆಯಲಾಗುವುದು.
    - ಲಡ್ಡು ಗೋಪಾಲ ಸಾಲಿಗ್ರಾಮ, ಹಯಗ್ರೀವ ಸಾಲಿಗ್ರಾಮ, ಕೃಷ್ಣ ಸಾಲಿಗ್ರಾಮ, ಕೂರ್ಮ ಸಾಲಿಗ್ರಾಮ, ನರಸಿಂಹ ಸಾಲಿಗ್ರಾಮ, ಸುದರ್ಶನ ಸಾಲಿಗ್ರಾಮ, ಬಲರಾಮ ಸಾಲಿಗ್ರಾಮ, ವರಹ ಸಾಲಿಗ್ರಾಮ, ವಾಮನ ಸಾಲಿಗ್ರಾಮ, ಕಲ್ಕಿ ಸಾಲಿಗ್ರಾಮ, ಬುದ್ಧ ಸಾಲಿಗ್ರಾಮ, ಮತ್ಸ ಸಾಲಿಗ್ರಾಮ, ಪದ್ಮನಾಭ ಸಾಲಿಗ್ರಾಮ, ಪರಶುರಾಮ ಸಾಲಿಗ್ರಾಮ ಸೇರಿದಂತೆ ಇನ್ನೂ ಅನೇಕ ಹೆಸರುಗಳಿಂದ ಕರೆಯಲಾಗುವುದು.

## ಸಾಲಿಗ್ರಾಮ ಪೂಜೆಗೆ ಹೇಳುವ ಮಂತ್ರಗಳು

- ಸಾಲಿಗ್ರಾಮವನ್ನು ಪೂಜಿಸುವಾಗ ಈ ಕೆಳಗಿನ ವಿಶೇಷ ಮಂತ್ರಗಳನ್ನು ಹೇಳಬೇಕು. ಇದರಿಂದ ದೇವನು ಸಂತುಷ್ಟನಾಗುವನು.

| | |
|---|---|
| ಓಂ ಶ್ರೀ ಬಾಲಗೋಪಾಲಾಯ ನಮಃ | ಓಂ ನಮೋ ನಾರಾಯಣಾಯ ನಮಃ |
| ಓಂ ಶ್ರೀ ದಾಮೋದರಾಯ ನಮಃ | ಓಂ ನಮೋ ವಾಗ್ವತೇ ಬಸುದೇವಾಯ ನಮಃ |
| ಓಂ ಶ್ರೀ ಕೇಶವಾಯ ನಮಃ | ಓಂ ಶ್ರೀ ಮುಕ್ತ ಚಿತ್ರ ಗೋವಿಂದಾಯ ನಮಃ |
| ಓಂ ಶ್ರೀ ಅನಂತಾಯ ನಮಃ | ಓಂ ಶ್ರೀ ಸಾಲಿಗ್ರಾಮ ಶಿಲಾ ರೂಪಾಯ ನಮಃ |
| ಓಂ ಶ್ರೀ ಮಾಧವ್ಯ ನಮಃ | ಓಂ ಶ್ರೀ ಶಿವ ಸ್ತುತಾಯ ನಮಕ |
| ಓಂ ಶ್ರೀ ಗಂದಕಿ ನಾಯಕಾಯ ನಮಃ | ಓಂ ಶ್ರೀ ಕೇಶವಾಯ ನಮಃ |

ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ

- ಬ್ರಹ್ಮ ಹತ್ಯಾ ದೋಷ ನಿವಾರಣೆ ನಿತ್ಯವೂ ಸಾಲಿಗ್ರಾಮದ ಪೂಜೆ ಮಾಡಿದರೆ ನಮ್ಮ ಪಾಪ ಕರ್ಮಗಳು ತೊಳೆಯುವುದು.
    - ಬ್ರಹ್ಮ ಹತ್ಯೆ ಮಾಡಿದ ಪಾಪವು ಸಹ ಸಾಲಿಗ್ರಾಮದ ಪೂಜೆ ಮಾಡುವುದರ ಮೂಲಕ ತೊಳೆದು ಹೋಗುವುದು.